ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1996 |
| ಸದಸ್ಯರ ಹೆಸರು | ಶ್ರೀ ಕುಶಾಲಪ್ಪ ಎಂ ಪಿ (ಸುಜಾ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ವಿಷಯ | ಕೊಡಗು ಜಿಲ್ಲೆಯಲ್ಲಿ ವೃದ್ಧಾಪ್ಯ ವೇತನ ಪಡೆಯುವ ಬಗ್ಗೆ. |
| ಉತ್ತರಿಸಬೇಕಾದ ದಿನಾಂಕ | 16-03-2022 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು. |

| ಪ್ರಶ್ನೆ | ಉತ್ತರ |
|---|---|
| (ಅ) ಕಳೆದ ಮೂರು ವರ್ಷಗಳಿಂದ ಕೊಡಗು ಜಿಲ್ಲೆಯ ಮಡಿಕೇರಿ ಮತ್ತು ವಿರಾಜಪೇಟೆ ಕ್ಷೇತ್ರಗಳಲ್ಲಿ ಎಷ್ಟು ಫಲಾನುಭವಿಗಳು ವೃದ್ಧಾಪ್ಯ ವೇತನವನ್ನು ಪಡೆಯುತ್ತಿದ್ದಾರೆ;(ವಿವರ ನೀಡುವುದು) | ಕೊಡಗು ಜಿಲ್ಲೆಯ ಮಡಿಕೇರಿ ಮತ್ತು ವಿರಾಜಪೇಟೆ ಕ್ಷೇತ್ರಗಳಲ್ಲಿ ಒಟ್ಟು 4487 ಫಲಾನುಭವಿಗಳು ವೃದ್ಧಾಪ್ಯ ವೇತನ ಪಡೆಯುತ್ತಿದ್ದು, ವಿವರ ಈ ಕೆಳಗಿನಂತಿದೆ. (ಕೋಷ್ಟಕ ಕೆಳಗೆ) |
| (ಆ) ಎಷ್ಟು ಅರ್ಜಿಗಳು ಬಾಕಿ ಉಳಿದಿವೆ ಯಾವ ಕಾರಣಕ್ಕೆ ಬಾಕಿ ಉಳಿದಿದೆ; (ವಿವರ ನೀಡುವುದು)<br>(ಇ) ಬಾಕಿ ಉಳಿದ ವೃದ್ಧಾಪ್ಯ ಅರ್ಜಿಗಳನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು; (ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ವೃದ್ಧಾಪ್ಯ ವೇತನ ಕೋರಿ ಸ್ವೀಕೃತವಾದ ಅರ್ಜಿಗಳಲ್ಲಿ 275 ಬಾಕಿ ಉಳಿದಿರುತ್ತದೆ. ಸದರಿ ಅರ್ಜಿಗಳು ಪರಿಶೀಲನಾ ಹಂತದಲ್ಲಿದ್ದು, ಸಕಾಲ ಕಾಲಮಿತಿ ಒಳಗೆ ಇರುತ್ತದೆ. ನಿಗಧಿತ ಕಾಲಮಿತಿ 45 ದಿನಗಳ ಒಳಗೆ ಪರಿಶೀಲನೆ ಪೂರ್ಣಗೊಳಿಸಿ ಅರ್ಹ ಫಲಾನುಭವಿಗಳಿಗೆ ಮಂಜೂರಾತಿ ನೀಡಲಾಗುವುದು. |
| (ಈ) ಕೊಡಗು ಜಿಲ್ಲೆಯ, ಹೊಸದಾಗಿ ರಚನೆಯಾಗಿರುವ ಕುಶಾಲನಗರ ತಾಲ್ಲೂಕು & ಪೊನ್ನಪೇಟ್ ತಾಲ್ಲೂಕಿನ ಹೊಸದಾಗಿ ಕಂದಾಯ ಭವನ ನಿರ್ಮಿಸಲು ಜಿಲ್ಲಾಧಿಕಾರಿಗಳಿಂದ ಸ್ಥಳ ಮಂಜೂರಾತಿ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಬಂದಿದಿಯೇ; ಬಂದಿದ್ದಲ್ಲಿ, ವಿವರ ನೀಡುವುದು;<br>(ಉ)ಕಂದಾಯ ಭವನ ಮಂಜೂರಾತಿಗೆ ಎಷ್ಟು ಅನುದಾನ ಬಿಡುಗಡೆ ಆಗಿದೆ; ಅನುದಾನ ಬಿಡುಗಡೆಯಾಗಿದ್ದಲ್ಲಿ ವಿವರ ನೀಡುವುದು? | ಕಾವೇರಿ ನೀರಾವರಿ ನಿಗಮದ ಸ್ವಾಧೀನದಲ್ಲಿರುವ ಜಮೀನನ್ನು ಕುಶಾಲನಗರ ತಾಲ್ಲೂಕು ಆಡಳಿತ ಭವನ ನಿರ್ಮಾಣಕ್ಕೆ ಮಂಜೂರು ಮಾಡುವಂತೆ ಕೋರಿ ಜಿಲ್ಲಾಧಿಕಾರಿಯವರು ಸಲ್ಲಿಸಿದ್ದ ಕೋರಿಕೆಯನ್ನು ಪರಿಶೀಲಿಸಿ ಪ್ರಸ್ತಾಪಿಸಿರುವ ಜಮೀನು ಕಾವೇರಿ ನೀರಾವರಿ ನಿಗಮದ ಜಮೀನಾಗಿರುವುದರಿಂದ ಕುಶಾಲನಗರ ತಾಲ್ಲೂಕು ಆಡಳಿತ ಭವನಕ್ಕೆ ಸೂಕ್ತ ಸರ್ಕಾರಿ ಜಮೀನು ಲಭ್ಯವಿರುವುದಿಲ್ಲ ಎಂಬುದನ್ನು ಖಚಿತಪಡಿಸಿಕೊಂಡು ತದನಂತರ ಕಾವೇರಿ ನೀರಾವರಿ ನಿಗಮದೊಂದಿಗೆ ಸಮಾಲೋಚಿಸಿ ಕಾವೇರಿ ನೀರಾವರಿ ನಿಗಮವು ಜಮೀನನ್ನು ಬಿಟ್ಟುಕೊಡಲು ಒಪ್ಪಿದಲ್ಲಿ ನಿಯಮಾನುಸಾರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾಧಿಕಾರಿಯವರಿಗೆ ತಿಳಿಸಲಾಗಿದೆ.<br>ಪೊನ್ನಂಪೇಟೆ ತಾಲ್ಲೂಕಿನಲ್ಲಿ ಹೊಸದಾಗಿ ಕಂದಾಯ ಭವನ ನಿರ್ಮಾಣಕ್ಕಾಗಿ ಜಮೀನು ಮಂಜೂರಾತಿ ಪ್ರಸ್ತಾವನೆಯು ಜಿಲ್ಲಾಧಿಕಾರಿಯವರಿಂದ ಇನ್ನೂ ಸ್ವೀಕೃತವಾಗಿರುವುದಿಲ್ಲ. |

| ಕ್ರ ಸಂ | ಕ್ಷೇತ್ರದ ಹೆಸರು | ಕಳೆದ 3 ವರ್ಷಗಳಿಂದ ವೃದ್ಧಾಪ್ಯ ವೇತನವನ್ನು ಪಡೆಯುತ್ತಿರುವ ಫಲಾನುಭವಿಗಳ ಸಂಖ್ಯೆ |
|---|---|---|
| 1 | ಮಡಿಕೇರಿ ವಿಧಾನ ಸಭಾ ಕ್ಷೇತ್ರ | 2166 |
| 2 | ವಿರಾಜಪೇಟೆ ವಿಧಾನ ಸಭಾ ಕ್ಷೇತ್ರ | 2321 |
| | **ಒಟ್ಟು** | **4487** |

ಸಂಖ್ಯೆ:DSSP-LCQ- 10/2022

(ಆರ್. ಅಶೋಕ)
ಕಂದಾಯ ಸಚಿವರು